# ಜೀವನದ ಪ್ರಮುಖ ಪ್ರಶ್ನೆಗಳು ?

## ದೇವರು ಯಾರು ? ಆತನ ಬಗ್ಗೆ ನಮ್ಮ ಅಭಿಪ್ರಾಯವೇನು ?

ದೇವರು ಒಬ್ಬ ನಾಮ ಹಲವು ಎಂದು ನಮ್ಮೆಲ್ಲರ ಅಭಿಪ್ರಾಯ ಆದರೆ ನಮ್ಮೆಲ್ಲರಿಗೆ ಇರುವುದು ಒಂದೇ ಗುರುತಿನ ಚೀಟಿ ಅದರಲ್ಲಿ ಪ್ರತಿಯೊಬ್ಬನಿಗೆ ಎಷ್ಟೇ ಹೆಸರುಗಳು ಇದ್ದರೂ ಗುರುತಿನ ಚೀಟಿಯ ಪ್ರಕಾರ ನಮ್ಮ ಹೆಸರು ಒಂದೇ ಆಗಿರುತ್ತದೆ. ಆ ಗುರುತಿನ ಚೀಟಿಗೆ ಎಷ್ಟು ಶಕ್ತಿ ಇದೆ ಎಂದರೆ ಅದು ಆ ಮನುಷ್ಯನ ಬೆರಳಚ್ಚು, ಕಣ್ಣು, ಮೈಮೇಲಿನ ಗುರುತುಗಳ ಪಟ್ಟಿ, ವಿಳಾಸ ಅದರಲಿದ್ದು ಅ ಮನುಷ್ಯ ಇಂತವನೇ ಅಂತಾ ಹುಡುಕಿ ಕೊಡುತ್ತದೆ, ಈ ಲೋಕದಲ್ಲಿ ಇರುವ ಪ್ರತಿಯೊಬ್ಬನಿಗೆ ಅವನದೇ ಆದ ಬೆರಳಚ್ಚು ಗುರತು ಉಂಟುಮಾಡಿ ಪ್ರತಿಯೊಬ್ಬನನ್ನು ವಿಶೇಷವಾಗಿ ರೂಪಿಸಿದ ದೇವರಿಗೆ ಮನುಷ್ಯರಾದ ನಾವು ಹೆಸರಿಟ್ಟು ಪ್ರಾಣ, ಪಕ್ಷಿ, ಗಿಡ, ಮರ, ಕಲ್ಲು, ಕೆತ್ತನೆಗೆ ದೇವರು ಅನ್ನಲು ಎಷ್ಟರವರು? ಎಲ್ಲಾ ಆಚರಣೆ (ಧರ್ಮ) ಗಳನ್ನು ಬದಿಗಿಟ್ಟು ಸೃಷ್ಟಿಕರ್ತನು ಯಾರು ಎಂಬುದನ್ನು ತಿಳಿಯಲು ಪ್ರಯತ್ನಿಸೋಣ. ಏಕೆಂದರೆ ನಾವೆಲ್ಲರೂ ಒಂದು ದಿನ ಆತನ ಮುಂದೆ ನಿಲ್ಲಬೇಕು, ದೇವರು ನಮಗೆ ಕೊಟ್ಟ ಜೀವಿತಕ್ಕೆ ಲೆಕ್ಕ ಒಪ್ಪಿಸಲೇಬೇಕು. ಕೇವಲ ನಮಗೆ ಇರುವ ಅತಿ ಸಣ್ಣ ಕೆಲಸದಲ್ಲಿ ನಾವು ಲೆಕ್ಕ ಕೊಡುತ್ತೇವೆ. ದೇವರು ನಮಗೆ ಕೊಟ್ಟ ಆಶೀರ್ವಾದ (ಆರೋಗ್ಯ,ವಿದ್ಯೆ,ತಂದೆ–ತಾಯಿ,ಮನೆ, ಸಂಗಾತಿ,ಮಕ್ಕಳು, ಸ್ನೇಹಿತರು,ಬಂಧುಗಳು) ಮತ್ತು ಶಾಪಗಳಿಗೆ (ಕ್ರಮವಿಲ್ಲದ ಜೀವನ, ಅತಿಯಾದ ಆಶೆ, ಸುಳ್ಳು, ಮೋಸ, ವಂಚನೆ, ಹಾದರ, ಮೂರ್ತಿ ಪೂಜೆ) ಇವುಗಳಿಗೆ ಲೆಕ್ಕ ಬೇಡವೇ ? ಹೌದು! ಇದಕ್ಕೆಲ್ಲ ಮನುಷ್ಯ ಸೃಷ್ಟಿಸಿದ ದೇವರಿಗೆ ಲೆಕ್ಕ ಕೊಡಲೇಬೇಕು.

## ಭೂಮಿ ಆಕಾಶಗಳ ದೇವರು ಇದ್ದಾನೆಯೇ ?

ಯಾರೋ ಒಬ್ಬರು ಭೂಮ್ಯಾಕಾಶಗಳನ್ನು ಉಂಟು ಮಾಡಿದ್ದಾರೆ. ಏಕೆಂದರೆ ಆತನಿಂದಲೇ ನಾವು ಬೆಳಕನ್ನು ನೋಡುತ್ತಾ ಇದ್ದೇವೆ. ಮನುಷ್ಯನ ಜೀವಿತ ಇವತ್ತಿದ್ದು ನಾಳೆ ಇಲ್ಲಾ, ನಿನ್ನೆ ಇದ್ದವರೂ ನಾಳೆ ಇಲ್ಲಾ ಅಳಿದು ಹೊಗುತ್ತೇವೆ. ಆದರೆ ಆತನು ಸೃಷ್ಟಿಸಿದ ಭೂಮಿ, ಆಕಾಶ, ಸೂರ್ಯ ಅಳಿಯಲಿಲ್ಲ ಇವುಗಳನ್ನು ಉಂಟುಮಾಡಿದವನಿಗೆ ದೇವರು ಅನ್ನುತ್ತೇ ವೆ.

## ದೇವರು ಯಾರು ? ಆತನು ಇದ್ದಾನೆ ಅಂತಾ ತಿಳಿಯುವುದು ಹೇಗೆ?

ಈ ಜಗದಿ ಸಾಕಷ್ಟು ದೇವರ ಕುರಿತಾಗಿ ಅನೇಕ ಗ್ರಂಥಗಳು ಇದ್ದು ಅವುಗಳಲ್ಲಿ ಪ್ರಮುಖವಾಗಿ ಸತ್ಯವೇದ (ಬೈಬಲ್)ಅನ್ನುವ ಗ್ರಂಥ ಈ ಕೆಳಗಿನಂತೆ ಹೇಳುತ್ತದೆ, ಅದು ನಮ್ಮದ್ದಲ್ಲ ವಿದೇಶಿಯರದ್ದು ಅನ್ನಬೇಡಿರಿ ದೇವರು ನಮ್ಮ ದೇಶಕಷ್ಟೇ ದೇವರಲ್ಲ ಆತನು ಇಡೀ ಮನುಷ್ಯ ಕುಲ,ಭಾಷೆಗೆ, ಇಡೀ ಸೃಷ್ಟಿಗೇ ದೇವರು.

- ದೇವರನ್ನು ಯಾರು ಎಂದೂ ಕಂಡಿಲ್ಲ ಯೋಹಾನ 1 :18
- ನಾವೆಲ್ಲರೂ ದಾರಿ ತಪ್ಪಿದ ಕುರಿಗಳಂತಿದ್ದೆವು ; ನಮ್ಮಲ್ಲಿ ಪ್ರತಿಯೊಬ್ಬನು ತನ್ನ ತನ್ನ ದಾರಿಯನ್ನು ಹಿಡಿಯುತ್ತಿದ್ದನು (ದೇವರನ್ನು ಹುಡುಕುವಲ್ಲಿ) ಯೆಶಾಯ 53:6
- ಯಾವನು ಏಕಪುತ್ರನೂ ಸ್ವತಃ ದೇವರೂ ಆಗಿದ್ದು ತಂದೆಯ ಎದೆಯಲ್ಲಿದ್ದಾನೋ ಆತನೇ ತಿಳಿಯಪಡಿಸಿದನು ಯೋಹಾನ 1: 18 (ಯಾವನು ಅಂದರೆ ಯೇಸು ಕ್ರಿಸ್ತನು, ಏಕ ಪುತ್ರ ಅಂದರೆ ದೇವರ ಒಬ್ಬನೇ ಮಗ ಏಕೆ ಒಬ್ಬನೇ ಮಗ ಏಕೆಂದರೆ ಯೇಸು ಕ್ರಿಸ್ತನು ಮಾತ್ರ ದೇವರು ನಮ್ಮ ಪಕ್ಕದಲ್ಲಿದ್ದಾನೆ ಎಂದು ಈ ಕೆಳಗಿನಂತೆ ಹೇಳಿದ ವ್ಯಕ್ತಿ,
- ನೀನು ಪ್ರಾರ್ಥನೆ ಮಾಡಬೇಕಾದರೆ ನಿನ್ನ ಏಕಾಂತವಾದ ಕೋಣೆಯೊಳಗೆ ಹೋಗಿ ಪ್ರಾರ್ಥನೆ ಮಾಡು ಅಂತರಂಗದಲ್ಲಿ(ರಹಸ್ಯ) ನಡೆಯುದನ್ನು ನೋಡುವ ದೇವರು ನಿನಗೆ ಪ್ರತಿಫಲ ಕೊಡುವನು. ಮತ್ತಾಯ 6:6

ಸ್ವತಃ ದೇವರೂ ಹೇಗೆ ? ಆತನು ಬದುಕಿ 2024 ಸಾವಿರ ವರ್ಷ ಅದಕ್ಕೆ ಆಧಾರ ಕ್ರಿಸ್ತ ಶಕ ಮತ್ತು ಕ್ರಿಸ್ತ ಪೂರ್ವ 6000 ಸಾವಿರ ವರ್ಷಗಳ ಜೀವಕ್ಕೆ ಆತನು ಹೇಗೆ ದೇವರು? ಆತನೇ ದೇವರು ಹೇಗೆ ? ದೇವರು ಅನ್ನುವಾಗ ಆತನು ಮನುಷ್ಯನಿಗೆ ಅಸಾಧ್ಯವಾದ ಕಾರ್ಯಗಳ ಮಾಡುವವನು ಎಂದರ್ಥ ಯೇಸು ಕ್ರಿಸ್ತನು ತನ್ನ ಮನುಷ್ಯ ಜೀವಿತ ಕಾಲದಲ್ಲಿ 37 ಅದ್ಬುತ ಕಾರ್ಯಗಳ ಮೂಲಕ ಸೃಷ್ಟಿಯ ಮೇಲೆ ತನ್ನ ಅಧಿಕಾರ (ಅಧಿಕಾರ ಎಂದರೆ ಸತ್ತು ಕೊಳೆತು ನಾರುವ ನಾಲ್ಕು ದಿನದ ದೇಹಕ್ಕೆ ಸಮಾಧಿಯಿಂದ ಹೊರಗೆ ಕರೆಯುವಂತ ಅಧಿಕಾರ, ಎರೆಡು ರೊಟ್ಟಿ ಐದು ಮೀನುಗಳನ್ನು ಐದು ಸಾವಿರ ಜನರಿಗೆ ಕೊಟ್ಟ ಅಧಿಕಾರ, ಬಿರುಗಾಳಿಗೆ ಶಾಂತವಾಗು ಅಂದಾಗ ಶಾಂತವಾದ ಅಧಿಕಾರ, ಕುರುಡನಿಗೆ ಕಣ್ಣು ಕೊಟ್ಟ ಅಧಿಕಾರ, ಕಿವಿ ಕೊಟ್ಟ ಅಧಿಕಾರ,ಕುಷ್ಟನನ್ನು ಗುಣಪಡಿಸಿದ ಅಧಿಕಾರ ) ಹೀಗೆ ಅನೇಕ ಆಧಿಕಾರಗಳ ದೈವಿಕತೆ ತನ್ನಲ್ಲಿ ಇದ್ದರೂ ಸಹ ಶಿಶ್ಚರ ಪಾದ ತೊಳೆದು, ಸಾಯುವ ಕೊನೆಯ ಗಳಿಗೆಯಲ್ಲಿ ಸಹ ಮನುಷ್ಯರನ್ನು ನನ್ನಂತೆ ಕ್ಷಮಿಸಿರಿ ಅಂತ ಹೇಳಿ ಕೊಟ್ಟರು.

ಭೂಮ್ಯಾಕಾಶಗಳನ್ನು ಉಂಟು ಮಾಡಿದ ದೇವರು ಸರ್ವ ವ್ಯಾಪಿ (OMNIPOTENT) ಆತನು ನಮ್ಮ ಪಕ್ಕದಲ್ಲಿದ್ದು ನಮ್ಮ ಅಂತರಂಗವನ್ನು(ಗುಪ್ತವನ್ನು) ನೋಡುತ್ತಾನೆ. ಮನುಷ್ಯ ಕಣ್ಣಿದ್ದು ಕುರುಡನು ತನ್ನ ದೇಹದ ಒಳಗೆ ಇರುವ ಅಂಗಗಳ ಕಾರ್ಯಗಳ ಅರಿಯನು. ಆದರೆ ದೇವರು ಸೃಷ್ಟಿಯ ಕಣ ಕಣವನ್ನು ಅರಿತಿದ್ದಾನೆ.

## ದೇವರು ಮತ್ತು ಯೇಸು

ಸತ್ಯವೇದವನ್ನು ಅರ್ಥ ಮಾಡಿಕೊಳ್ಳುವುದು ಹೇಗೆ ? ಹಳೆಯ ಒಡಂಬಡಿಕೆ ಮತ್ತು ಹೊಸಒಡಂಬಡಿಕೆ ಎಂಬ ಎರೆಡು ಭಾಗಗಳಲ್ಲಿದ್ದು ಹಳೆಯ ಒಡಂಬಡಿಕೆಯಲ್ಲಿ (ಒಡಂಬಡಿಕೆ ಅಂದರೆ ದೇವರ ಮತ್ತು ಮನುಷ್ಯನ ಹೊಂದಾಣಿಕೆ ) ಆತ್ಮನಾದ ದೇವರು ಬರೀ ಕಣ್ಣಿಗೆ ಕಾಣಸದೇ ಆತ್ಮನಿಂದ ಹೊರಟ ಮಾತುಗಳು (ಆದಿಯಲ್ಲಿ ವಾಕ್ಯವಿತ್ತು ಅಂದರೆ ಕಾಣದ ಆತ್ಮ ವಾಕ್ಯದ ಮೂಲಕ ಮಾತಾಡಿದ ಮಾತುಗಳು) ಕಾರ್ಯ ರೂಪಕ್ಕೆ ಬಂದು ಐದು ದಿನಗಳಲ್ಲಿ ಭೂಮ್ಯಾಕಾಶಗಳನ್ನು,ಸೂರ್ಯ,ಚಂದ್ರ, ಪ್ರಾಣಿ ಪಕ್ಷಿ, ಗಿಡಮರ ಹಣ್ಣುಗಳನ್ನು ಬರೀ ಮಾತಿನಿಂದ ಸೃಷ್ಟಿಯ ಮಾಡಿ ಆರನೇ ದಿನದಲ್ಲಿ ತನ್ನ ಆತ್ಮದ ರೂಪದಲ್ಲಿ ಮನುಷ್ಯನನ್ನೂ ಅವನ ಸಂಗಾತಿಯಾಗಿ ಸ್ತ್ರೀಯನ್ನು ಮಣ್ಣಿನಿಂದ ರೂಪಿಸಿ ಆ ಮಣ್ಣಿನ ಗೊಂಬೆಗೆ ಮೂಗಿನಲ್ಲಿ ಜೀವ ಶ್ವಾಸವನ್ನು ಊದಿ ಬದುಕುವ ನೀವು ಕಾಣುವ ಸೃಷ್ಟಿಗೆಲ್ಲಾ ನೀನೆ ವಾರಸುದಾರ ಎಂದು ಹೇಳಿದನು, ನಾವು ವರ್ಷಕ್ಕೆ ಒಮ್ಮೆ ಪರೀಕ್ಷೆ ಬರಿಯುವ ಹಾಗೆ ದೇವರು ಸಹ ಮನುಷ್ಯನಿಗೆ ಪರೀಕ್ಷೆಮಾಡಬೇಕೆಂದು ಅವರನ್ನು ಇರಿಸಿದ್ದ ತೋಟದಲ್ಲಿ ಮಧ್ಯ ಒಂದು ಮರವನ್ನು ನೆಟ್ಟು ಅದನ್ನು ಕಾಯಲಿಕ್ಕೆ ಒಂದು ಕುಯುಕ್ತಿಯ ಹಾವನ್ನು ಇರಿಸಿದನು. ನೀನು ತೋಟದ ಎಲ್ಲಾ ಮರದ ಹಣ್ಣನ್ನು ತಿನ್ನು ಆದರೆ ಮಧ್ಯದಲ್ಲಿ ನಾನು ಹಾಕಿದ ಮರದ ಹಣ್ಣನ್ನು ನೀನು ತಿನ್ನ ಬಾರದು ತಿಂದ ದಿನದಿಂದ ನೀನು ಒಳ್ಳೆದರ ಕೆಟ್ಟದ್ದರ ಭೇದವನ್ನು ಅರಿಯುತ್ತಿ ಮತ್ತು ಸತ್ತು ಹೋಗುತ್ತಿ ಎಂದು ಹೇಳಿದನು, (ಅಂದರೆ ಅಲ್ಲಿಯವರೆಗೆ ಚಿಕ್ಕ ಮಗುವಿಗೆ ಅಪ್ಪ ಅಮ್ಮ ಹೇಳಿದ ಮೇಲೆ ಬಟ್ಟೆಯ ಅರಿವು ಬರುವಂತೆ ಇದ್ದ ನರ & ನಾರಿ, ಛೀ ಇದು ಕೆಟ್ಟದ್ದು ಎಂಬ ಭಾವನೆ ಅಥವಾ ಜ್ಞಾನ ಬರುವುದು ಎಂದರ್ಥ ) ಏಕೆ ದೇವರಿಗೆ ಈ ಪರೀಕ್ಷೆ ಆಲೋಚನೆ ಬಂತೆಂದರೆ ಈಗಾಗಲೇ ದೇವರು ತಾನೇ ಸೃಷ್ಟಿಸಿದ ಆತ್ಮನಾದ ದೇವದೂತನೊಬ್ಬ ತಾನೂ ದೇವರು (ಅವನಿಗೆ ಸೈತಾನ/ಲೂಸಿಪರ್ ಎಂದುಕೂಡ ಹೆಸರು ) ಎಂದು ಹೇಳಿಕೊಂಡು ತಿರುಗುತ್ತಿದ್ದ, ಆದಕಾರಣ ಈ ನರ & ನಾರಿ ಸೃಷ್ಟಿ ಕೂಡ ಭೂಮಿಯ ವಾರಸುದಾರರಾಗಿ ಮಾಡಿದ ನನ್ನನ್ನು ತಿಸ್ಕರಿಸುವರೇನೊ ಎಂದು ಪರೀಕ್ಷೆ ಮಾಡಿದಾಗ , ಆತ್ಮವಾಗಿದ್ದ ಸೈತಾನನು ಹಾವಿನಲ್ಲಿ ಸೇರಿ ನರ & ನಾರಿ ಯನ್ನು ದೇವರು ಬೇಡವೆಂದ ಹಣ್ಣನ್ನು ತಿನ್ನಿಸಿದನು. ಈ ದಿನದ ವರೆಗೆ ತಿನ್ನುವ ಗಂಟಲಿಗೆ ಹಾವನ್ನು ಸುತ್ತಿಕೊಂಡು ದೇವರು ಅನ್ನಿಸಿಕೊಳ್ಳವ ವಿಗ್ರಹಗಳನ್ನು ನಾವು ನೋಡುತ್ತೇವೆ. ಆದರೆ ಸತ್ಯ ವೇದ ಹೀಗೆ ಹೇಳುತ್ತದೆ ಕಾಣದ ದೇವರನ್ನು ರಹಸ್ಯವಾದ ನಮ್ಮ ಹೃದಯದ ಕೋಣೆಯಲ್ಲಿ ಆರಾಧಿಸಬೇಕು ಕಥೆಗಳ ವಿಗ್ರಹಗಳನ್ನಲ್ಲ. ಜೀವವಿಲ್ಲದ ವಿಗ್ರಹಗಳು ದೇವರನ್ನು ಪ್ರತಿನಿಧಿಸುವುದಿಲ್ಲ . ಉದಾಹರಣೆಗೆ ಒಂದು ವಸ್ತುವನ್ನು ಕೊಳ್ಳುವಾಗ, ಮಾರುವಾಗ ಜೀವವಿರುವ ಪ್ರತಿನಿಧಿ ಬೇಕು. ಆ ಜೀವ ನಮ್ಮಲ್ಲಿದೇ ಹೊರತು ವಿಗ್ರಹಗಳಲ್ಲಿಲ್ಲ.

## ದೇವರು ಬೇಡವೆಂದ ಹಣ್ಣನ್ನು ತಿಂದದ್ದರಿಂದ ಆದದ್ದಾದರೂ ಏನು ?

ದೇವರ ಮಾತನ್ನು ಸುಳ್ಳಾಗಿಸಲು ಹೊರಟಿದ್ದ ಸೃಷ್ಟಿ, ಮನುಷ್ಯ ಕುಲಕ್ಕೆ ಮತ್ತು ತನ್ನನ್ನೆ ದೇವರಷ್ಟು ಹೆಚ್ಚಿಸಿ ಕೊಂಡ ದೇವದೂತ ಕುಲಕ್ಕೆ ದೇವರು ತಾನು ಹೇಳಿದ ಮಾತು ಸತ್ಯ ಎಂಬುದನ್ನು ತೋರಿಸದೇ ಇದ್ದರೆ ಈ ದಿನ ದೇವರ ಅಸ್ತಿತ್ವ ಮನುಷ್ಯನ ಮದ್ಯ ಇರುತ್ತಿರಲಿಲ್ಲ. ಹಾಗಾಗಿ ದೇವರು ಹೇಳಿದಂತೆ ಮಣ್ಣಿ ನಿಂದ ಬಂದ ಮನುಷ್ಯ ಕುಲಕ್ಕೆ ಮಣ್ಣಿನಿಂದ ತಿರುಗಿ ಮಣ್ಣಿಗೆ ಸೇರುವ ಸಾವು ಬಂತು ಸಾಯುವುದು ಅಂದರೆ ಒಬ್ಬರನ್ನೊಬ್ಬರು ಎಂದಿಗೂ ನೋಡದೇ ಹೋಗುವುದು ಎಂದರ್ಥ ಈ ದಿನವರೆಗೆ ನಮ್ಮ ಪ್ರಿಯರು ಸತ್ತರೆ ಅವರನ್ನು ಕಾಣದೇ ಮಣ್ಣಲ್ಲಿ ಮಣ್ಣಾಗಿ ಹೋಗುತ್ತೇವೆ. ಆ ದೇವರು ತನ್ನ ಮಾತನ್ನು ಮನುಷ್ಯನ ಜೀವಿತದಲ್ಲಿ ನಿಜವಾಗಿಸಿದ. ಮತ್ತು ಸತ್ಯವೇದದ ಪ್ರಕಾರ ದೇವರು ಬೇಡವೆಂದ ಹಣ್ಣನ್ನು ತಿಂದದ್ದರಿಂದ ಪಾಪವು (ಅವಿಧೇಯತೆ) ನಾರಿಯ ರಕ್ತದಲ್ಲಿ ಸೇರಿ ತನ್ನ ಮುಂದಿನ ಪೀಳಿಗೆ ಅರಿಯುವಂತೆ ಹೆರುವಾಗ ಈಗ ಸಾಯುತ್ತೇನೆ ಅನ್ನುವಷ್ಟು ಹೆರಿಗೆಯ ನೋವು ಬಂತು ಏಕೆಂದರೆ ಯಾರ(ದೇವರ)

ಮಾತನ್ನೆ ಕೇಳದ ತಮಗೆ ತಿಳಿದಂತೆ ವರ್ತಿಸುವ ನಿನ್ನಂತ ನರ & ನಾರಿ ಈ ಭೂಮಿಗೆ ಬರುವರು ಎಂದು, ಮತ್ತು ನರನು ಸೈತಾನೊಂದಿಗೆ ಕೈ ಜೋಡಿಸಿ ಸೃಷ್ಟಿಕರ್ತನಿಗೆ ಮುಳ್ಳಿನಂತೆ ಚುಚ್ಚಿದ ಕಾರಣ ಭೂಮಿಯಲ್ಲಿ ಮುಳ್ಳುಗಳನ್ನು, ಕಳೆಗಳನ್ನು ಹಸನು ಮಾಡಿ ಬೆಳೆ ತೆಗೆದು ಹೊಟ್ಟೆ ಹೊರೆಯಬೇಕಾದ ಪರಸ್ಥಿತಿ ಬಂದಿತು. ಮತ್ತು ಹಾವಿಗೆ ನೀನು ಮನುಷ್ಯನ ಹಿಮ್ಮಡಿ ಕಚ್ಚಿ ಯಾವ ಪ್ರಾಣ ಬಿಡದ ವಿಷವನ್ನು ಮನುಷ್ಯನ ದೇಹದಲ್ಲಿ ಬಿಡುತ್ತಿ ಆ ವಿಷವು ನರನ ರಕ್ತ ವನ್ನು ಹಣ್ಣಿನ ತಿರುಳಿನಂತೆ ಗಟ್ಟಿಯಾಗ ಮಾಡಿ ಆತನ ಸಾವು ಬರುವುದರಿಂದ ಆತನಿಗೂ ನಿನಗೂ ಹಗೆ ಇರುವುದು ನಿನ್ನನ್ನು ಕಂಡಾಗೆಲ್ಲಾ ಆತನು ನಿನ್ನ ತಲೆ ಜಜ್ಜುವನು ನೀನು ಅವನ ಹಿಮ್ಮಡಿ ಕಚ್ಚುವಿ ಎಂದು ದೇವರು ನೇಮಿಸಿದನು. ಆ ಹಣ್ಣನ್ನು ತಿಂದ ತರುವಾಯ ದೈವಿಕ ಭಾವನೆ ಹೋಗಿ ದೈಹಿಕ ಭಾವನೆ ಮನುಷ್ಯ ನಲ್ಲಿ ಬಂತು ಹೇಗೆಂದರೆ ಚಿಕ್ಕ ಮಕ್ಕಳು ಬಟ್ಟೆ ಹಾಕದಿದ್ದರೆ ಸರಿ ಅವರು ದೇವರ ಸಮಾನ ಆದರೆ ಅದೇ ಪ್ರಾಯದವರು ಹಾಕದಿದ್ದರೆ ಅದು ಅವಮಾನ ಅವರ ಕೆಟ್ಟ ಭಾವನೆಗೆ ಅಲ್ಲಿಯವರೆಗೆ ಸಸ್ಯಹಾರಿಯಾಗಿದ್ದ ಆದಿಕಾಂಡ 1:29 ಮನುಷ್ಯ ಪ್ರಾಣಿಗೆ ದೇವರು ಮೊದಲ ನಿರ್ದೋಷ ಕುರಿಯನ್ನು ಅವರಿಗಾಗಿ ವಧಿಸಿ ಅವರಿಗೆ ಅಂಗಿಗಳನ್ನು ಮಾಡಿ ಕೊಟ್ಟು ಅದರ ಮಾಂಸ ತಿನ್ನಿಸ ಬೇಕಾಗಿ ಬಂತು. ಇದಕ್ಕಾಗಿ ದೇವರ ಮಕ್ಕಳಾದ ಮನುಷ್ಯರು ಮಾಡಿದ ತಪ್ಪಿಗಾಗಿ ಯೇಸು ಎಂಬ ದೇಹದಾರಿಯಾಗಿ ಬಂದು ನಿರ್ದೋಷ ಕುರಿಯಾಗಿ, ಹಣ್ಣಿನ ಮರದಿಂದ ಉಂಟಾದ ದೋಷಕ್ಕಾಗಿ ತಾನೇ ಕಾರಣ ಅನ್ನುತ್ತಿದ್ದ ಮನುಷ್ಯರಿಗಾಗಿ ಮರದ ಕಂಬದ ಮೇಲೆ ರಕ್ತವನ್ನು ಸುರಿಸಿ ತನ್ನ ದೇಹವನ್ನು ಶಿಕ್ಷಿಸುವುದಕ್ಕಾಗಿ ಕೊಟ್ಟನು .ಹೊಸ ಒಡಂಬಡಿಕೆಗೆ ಬಂದಾಗ ಯೋಹಾನ 1:1 ಆದಿಯಲ್ಲಿ ವಾಕ್ಯವಿತ್ತು ಆ ವಾಕ್ಯವು ದೇವರ ಬಳಿಯಲ್ಲಿತ್ತು ಆ ವಾಕ್ಯವೇ ದೇವರಾಗಿತ್ತು ಆ ವಾಕ್ಯ ವೆಂಬುವವನು ನರಾವತಾರವೆತ್ತಿ ನಮ್ಮ ಮದ್ಯದಲ್ಲಿ ವಾಸಮಾಡಿದನು. ಆದಿ ಅಂದರೆ ಎಲ್ಲದ್ದಕ್ಕೂ ಮೊದಲು ಕಣ್ಣಿಗೆ ಕಾಣಸದ ಆತ್ಮದಿಂದ ಮಾತುಗಳು ( ವಾಕ್ಯ) ಹೊರಟು ಭೂಮ್ಯಾಕಾಶಗಳ ಉಂಟುಮಾಡಿದ ವಾಕ್ಯವೇ ಗ್ರೀಕ್/ಅರೇಮಿಕ ಭಾಷೆಯ ಯೇಸು ಕ್ರಿಸ್ತ ಅಂದರೆ ನಮ್ಮ ಭಾಷೆಯಲ್ಲಿ ಅದಕ್ಕೆ ಬರಬೇಕಾದ ರಕ್ಷಕನು ಎಂದರ್ಥ ಹೇಗೆ ನಾವು ಸಂಸ್ಕೃತ ದಲ್ಲಿ ಕರ್ಣ ಎಂದರೆ ಕಿವಿ ಅನ್ನುತ್ತೇವೆ ಹಾಗೇಯೇ ಯೇಸು ಎಂಬ ದೇಹದಾರಿಯಾದನು. ಭೂಮ್ಯಾಕಾಶಗಳ ಉಂಟುಮಾಡಿದ ವಾಕ್ಯ ದೇಹಧಾರಿ ಏಕೆ? ಅನ್ನುವ ಪ್ರಶ್ನೆಗೆ ಈಗಾಗಲೇ ಮೇಲೆ ನೋಡಿದಂತೆ ಮನುಷ್ಯನು ದೇವರು ಬೇಡವೆಂದು ತಿಂದ ಹಣ್ಣು ಮನುಷ್ಯನ ದೇಹದಲ್ಲಿ ವಿಷವನ್ನು ಉಂಟುಮಾಡಿತು ಆ ವಿಷವು ಮರಣವನ್ನು ಬರಮಾಡುವುದು ಮರಣ ಎಂದರೆ ಅಗಲಿಸುವುದು ಎಂದರ್ಥ ಅದಕ್ಕೆ ಸತ್ಯವೇದ ಹೀಗೆ ಹೇಳುತ್ತದೆ ಜೀವನ ಮರಣ ನಾಲಿಗೆಯ ವಶ ಜ್ಞಾನೋಕ್ತಿ 18.21 ಯಾಕೋಬನು 3:8 ಹೀಗೆ ಹೇಳುತ್ತದೆ ನಾಲಿಗೆಯು ಮರಣಕರವಾದ ವಿಷದಿಂದ ತುಂಬಿ ಇದೆ ದೇವರು ನಮ್ಮಲ್ಲಿ ಬಂದು ದೇಹ ಸೇರಿದ ಆ ವಿಷವನ್ನು ತನ್ನ ಮರಣ ಮತ್ತು ಪುನರುತ್ಥಾನದ ಮೂಲಕ ತೆಗೆದು ಹಾಕಿದನು. 1 ಯೋಹಾನ 4;12 ದೇವರನ್ನು ಯಾರೂ ಎಂದು ನೋಡಿಲ್ಲ ನಾವು ಒಬ್ಬರನ್ನೊಬ್ಬರು ಪ್ರೀತಿಸಿದರೆ ದೇವರು ನಮ್ಮಲ್ಲಿ ನೆಲೆಗೊಂಡಿದ್ದಾನೆ ಮತ್ತು ಆತನ ಪ್ರೀತಿ ನಮ್ಮಲ್ಲಿ ಸಿದ್ದಿಗೆ ಬರುತ್ತದೆ. ಯೋಹಾನ 15 : 7 ನೀವು ನನ್ನಲ್ಲಿಯೂ ನನ್ನ ವಾಕ್ಯಗಳು ನಿಮ್ಮಲ್ಲಿಯೂ ನೆಲೆಗೊಂಡಿದ್ದರೆ ಏನು ಬೇಕಾದರೂ ಬೇಡಿಕೊಳ್ಳಿರಿ ಅದು ನಿಮಗೆ ದೊರೆಯುವುದು. ಯಾವಾಗ ದೊರೆಯುವುದು ನೆಲೆಗೊಂಡಾಗ ಅಂದರೆ 1 ಯೋಹಾನ 4:15 ಯೇಸು ದೇವರ ಮಗನಾಗಿದ್ದಾನೆಂದು ಯಾವನು ಒಪ್ಪಿಕೊಂಡು ಹೇಳುತ್ತಾನೋ ಅವನಲ್ಲಿ ದೇವರು ನೆಲೆಗೊಂಡಿದ್ದಾನೆ. ಇಲ್ಲಿ ನೋಡುವುದಾದರೆ ಎರೆಡು ಸಂಗತಿಗಳು ಉಂಟು ಒಂದು ಒಪ್ಪಿಕೊಳ್ಳುವುದು ಇನ್ನೊಂದು ಹೇಳುವುದು. ನಾವು ಯೇಸು ದೇವರ ಮಗನು ಎಂಬುದಾಗಿ ಒಪ್ಪಿಕೊಳ್ಳಲೇಬೇಕು ಏಕೆಂದರೆ ಆತನಲ್ಲಿ ಅಂಥಾ ದೈವಿಕ ಕಾರ್ಯಗಳು ಉಂಟು. ಮತ್ತು ಆತನ ಬಗ್ಗೆ ಹೇಳಬೇಕು ಈಗ ಮನುಷ್ಯನ ಮಧ್ಯ ದೇವರು ಎರೆಡು ಸಂಗತಿ ಗಳನ್ನು ಇಟ್ಟಿರುವುದನ್ನು ನೋಡುತ್ತೇವೆ ಒಂದು ನಿಶ್ಚಿಥಾರ್ತ ಮತ್ತೊಂದು ಮದುವೆ , ನಿಶ್ಚಿಥಾರ್ತ ಗಂಡು ಹೆಣ್ಣು ಪರಸ್ಪರ ಒಪ್ಪಿ ತಂದೆತಾಯಿಗಳನ್ನು ಕುಟುಂಬದವರನ್ನು ಒಪ್ಪಿಸಿ ನಾವು ಕೂಡಿ ಬಾಳುತ್ತೇವೆ ಅನ್ನುವ ದೃಢ ನಿರ್ಧಾರ ನಿಶ್ಚಿಥಾರ್ತ, ನಂತರ ಮದುವೆ ಎಲ್ಲರಿಗೂ ಆಮಂತ್ರಣ ನಮ್ಮ ಸೇರಿ ಬಾಳುವ ಸಂತೋಷಕ್ಕೆ ಎಲ್ಲರಿಗೂ ಔತಣ ಎಲ್ಲರ ಉಪಸ್ಥಿತಿ ಗಂಡು ಹೆಣ್ಣಿನ ಗುಣಗಾನ ಸರಿಯಾದ ಜೋಡಿ ಹಾಗೆ ಹೀಗೆ. ಅದೇ ರೀತಿ ನೀನು ಮತ್ತು ದೇವರ ನಡುವೆ ನಡೆಯುವ ನಾನು ನಿನ್ನ ಸಂಗಡ ಬಾಳುತ್ತೇನೆ ದೇವರೆ ಅನ್ನುವ ದೃಢ ನಿರ್ಧಾರ ಜನರಿಗೆ ಸತ್ಯವೇದವನ್ನು ಕೊಟ್ಟು ಆಮಂತ್ರಣ ಮತ್ತು ದೇವಾರಾಧನೆಯಲ್ಲಿ ಅವರ ಉಪಸ್ಥಿತಿ ಇವೆಲ್ಲವು ದೇವರು ನಮಗೆ ಕಲಿಯಲು ಕೊಟ್ಟ ಜ್ಞಾನದ ಸಂಗತಿಗಳು.

ನಮ್ಮ ಜೀವಿತದಲ್ಲಿ ಇಲ್ಲಿಯವರೆಗೂ ದೇವರು ಏನನ್ನು ಬಯಸಲಿಲ್ಲ ಪ್ರೀಯರೇ, ಯಾವುದೇ ಬಿಲ್ ಇಲ್ಲದೆ ಬೆಳುಕು,ನೀರು, ಗಾಳಿ ಕೊಟ್ಟಿದ್ದಾನೆ, ಥ್ಯಾಂಕ್ಸ ಹೇಳಿರಿ. ಆ ದೇವರಿಗೆ ನಿಮ್ಮ ಥ್ಯಾಂಕ್ಸ ಬಿಟ್ಟರೆ ಬೇರೆನೂ ಬೇಡ ಇದ್ದಲ್ಲೇ ಆತನಿಗೆ ನಾನು ನಿನಗೆ ಶರಣಾಗತನು ಎಂದು ಮೊಣಕಾಲೂರಿ ದೇವರೆ ಅನ್ನುವುದಾದರೆ ನಿಮ್ಮ ಸಹಾಯಕ್ಕೆ ಆತನು ಬರುವನು. ದೇವರ ಸೃಷ್ಠಿಯನ್ನು ನಂಬಬೇಡಿರಿ ಸೃಷ್ಟಿಸಿದ ದೇವರನ್ನು ನಂಬಿರಿ. ಆತನಿಗೆ ಹೆಸರಿಡಬೇಡಿರಿ ನಾವು ಆತನಿಗೆ ಹೆಸರಿಡುವಷ್ಟು ದೊಡ್ಡವರಲ್ಲ ಆತನು ನಿನ್ನೆ ಈ ಹೊತ್ತೂ ನಾಳೆ ನಿರಂತರ "ಇರುವಾತನು" (ಯೆಹೋವ ಹಿಬ್ರೂ ಭಾಷೆ) ಎಂಬುವುದೇ ಆತನ ನಾಮಧೇಯ.

ಈ ದಿನವೇ "ಸತ್ಯವೇದ"ಎಂಬ ಪುಸ್ತಕವನ್ನು ನಿಮಗೆ ಅತಿ ಅರ್ಥವಾಗುವ ಭಾಷೆಯಲ್ಲಿ ಕೊಂಡು ಓದಿರಿ ಅದರಲ್ಲಿರುವ ಸತ್ಯಗಳನ್ನು ಮನಃಪೂರ್ವಕವಾಗಿ ಗ್ರಹಿಸಿರಿ ದೇವರ ಮಂದೆ ನಿಲ್ಲಲ್ಲು ಸಿದ್ದರಾಗಿರಿ. ಶಾಲೆಗೆ ಹೋದ ತಕ್ಷಣ ಯಾರು ವಿದ್ಯಾವಂತರಾಗಲು ಸಾಧ್ಯವಿಲ್ಲ ದಿನವು ಆ ಪುಸ್ತಕಗಳನ್ನು ಮನನ ಮಾಡುವುದರಿಂದ ವಿದ್ಯೆ ಬರುವುದು ನೆನಪಿರಲಿ. ತಪ್ಪು ಕಂಡುಹಿಡಿಯಲು ಎಲ್ಲರಿಗೂ ಗೊತ್ತು ಆದರೆ ದೇವರ ಮುಂದೆ ನಿಲ್ಲಬೇಕು ಎಂಬ ಒಂದೇ ಗುರಿ ನಮ್ಮದಾಗಿರಲಿ. ನಮ್ಮನ್ನು ನಾವು ಮೋಸಪಡಿಸಿಕೊಳ್ಳದೆ ನಾವು ದೇವರ ಮುಂದೆ ನಿರ್ಭಯವಾಗಿ ನಿಲ್ಲುವುದಾದರೆ ನಮ್ಮ ಜೀವನ ಸಾರ್ಥಕ.

ಪರಲೋಕದಲ್ಲಿರುವ ನಮ್ಮ ತಂದೆಯೇ ನಿಮ್ಮ ನಾಮವು ಪರಿಶುದ್ಧ ಎಂದು ಎಣಿಸಲ್ಪಡಲಿ ನಿಮ್ಮ ರಾಜ್ಯವು ಬರಲಿ ನಿಮ್ಮ ಚಿತ್ತ ಪರಲೋಕದಲ್ಲಿ ನೆರವೇರುವ ಪ್ರಕಾರ ಭೂಲೋಕದಲ್ಲಿ ನೆರವೇರಲಿ ನಮ್ಮ ಅನುದಿನದ ಆಹಾರವನ್ನು ದಯಪಾಲಿಸು ನಮಗೆ ತಪ್ಪು ಮಾಡಿದವರನ್ನು ನಾವು ಕ್ಷಮಿಸಿದಂತೆ ನಮ್ಮ ತಪ್ಪುಗಳನ್ನು ಕ್ಷಮಿಸು ನಮ್ಮನ್ನು ಶೋಧನೆಗೆ ಸೇರಿಸದೆ ಕೇಡಿನಿಂದ ತಪ್ಪಿಸು ಏಕೆಂದರೆ ರಾಜ್ಯವು ಬಲವು ಮಹಿಮೆಯು ನಿಮ್ಮದೇ ಆಮೆನ್ ಎಂಬುದು ನಿಮ್ಮ ದಿನನಿತ್ಯದ ಪ್ರಾರ್ಥನೆ ಆಗಿರಲಿ.

## ಕ್ರೈಸ್ತ ಧರ್ಮ (ಆಚರಣೆ) ಧರ್ಮವೇ (ಆಚರಣೆಯೇ) ?

ಅಲ್ಲ ! ಖಂಡಿತ ಅಲ್ಲಾ , ಕ್ರೈಸ್ತ ರು ( ರಕ್ಷಿಸಲ್ಪಟ್ಟವರು ) ಸಭೆಯಾಗಿ ( ಚರ್ಚ ) ಕ್ರೈಸ್ತರು ಮಾತ್ರ ರಕ್ಷಿಸಲ್ಪಟ್ಟವರು ಹೇಗೆ ? ಬಾಯಿಂದ ನಾನು ಕ್ರೈಸ್ತನು ಎಂದು ಹೇಳಿಕೊಂಡು ಕೆಟ್ಟ ಸಂಗತಿಗಳನ್ನು ತುಂಬಿಕೊಂಡ ಪ್ರತಿಯೊಬ್ಬನು ಕ್ರೈಸ್ತನಲ್ಲಾ ಬದಲಾಗಿ, ಹೃದಯದಿಂದ ನಂಬಿ ಬಾಯಿಂದ ಅರಿಕೆ ಮಾಡಿ ತನ್ನಂತೆ ಇತರರನ್ನು ಪ್ರೀತಿಸಿ ಇರುವಾತನಿಂದ ನಾನು ನೀರಿನಿಂದ ಎಳೆಯಲ್ಪಟ್ಟು ನೆಲದ ಮಣ್ಣಿನಿಂದ ರೂಪಿತಗೊಂಡು ತಿರುಗಿ ಮಣ್ಣಿಗೆ ಸೇರುತ್ತೇನೆ ಮತ್ತು ದೇಹ ಮಣ್ಣಾದ ಮೇಲೆ ನನ್ನ ಮೂಗಿನಲ್ಲಿ ಜೀವಶ್ವಾಸ (ಪ್ರಾಣ & ಆತ್ಮ) ಊದಿ ನನ್ನನ್ನು ರೂಪಿಸಿ, ಬದುಕಿಸಿ, ಎಲ್ಲಾ ರೀತಿಯ ಸಂಬಂಧಗಳ ಮಧ್ಯ ಇರಿಸಿ ನಗುವಂತೆ. ಅಳುವಂತೆ, ಅನುಭವಿಸುವಂತೆ ಮಾಡಿದ ದೇವರ ಮುಂದೆ ನಿಲ್ಲುತ್ತೇನೆ ಎಂಬ ವಿಶ್ವಾಸದಿಂದ ನೀರಿನಿಂದ ಎಳೆಲ್ಪಟ್ಟವನೆಂದು (ದಿಕ್ಷಾಸ್ನಾನ) ತೆಗೆದುಕೊಂಡು ವಿಶ್ವಾಸಿಗಳೆಲ್ಲರೂ ಕೂಡಿ ಬರುವಲ್ಲಿ ಯಾವ ವಿಗ್ರಹವಿಲ್ಲದ ಒಂದು ಸೂರಿನ ಕೆಳಗೆ ಕೂಡಿ ಒಬ್ಬರಿಗೊಬ್ಬರು ದೇವರು ತಮ್ಮ ಜೀವಿತದಲ್ಲಿ ಮಾಡಿದ ಅದ್ಬುತಗಳ ಚರ್ಚೆಯೇ ಚರ್ಚ ಎಂಬುದಾಗಿದೆ. ಮತ್ತೆ ಶಿಲುಬೆ ಆಕಾರ ಏಕೆ ? ಅದು ಧನಾತ್ಮಕ ಚಿನ್ಹೆ (+) ಒಳ್ಳೆಯ ವಿಷಯದಲ್ಲಿ ಒಬ್ಬರನ್ನೊಬ್ಬರು ಸೇರಿಸಿಕೊಳ್ಳಿರಿ ಎಂಬ ವಿಷಯವನ್ನು ತಿಳಿಸುತ್ತದೆ. ಈಗ ಮೇಲೆ ಓದಿದ ಸಂಗತಿಗಳೆಲ್ಲವು ಯಾವುದೇ ಅಥವಾ ಯಾರ ಲಾಭಕ್ಕಾಗಿ ಅಥವಾ ಆಶೆ ಆಮಿಷಗಳಿಗೆ ಒಳಗಾಗಿ ಮುದ್ರಿಸಿರುವುದಿಲ್ಲ , ಬದಲಾಗಿ ನಮ್ಮನ್ನು ಅನಕ್ಷರತೆಯಿಂದ ಅಕ್ಷರತೆಯೆಡೆಗೆ ನಡಿಸಿದ ದೇವರನ್ನು ಪೂರ್ಣ ಬುದ್ಧಿಯಿಂದಲೂ , ಪೂರ್ಣ ಪ್ರಾಣದಿಂದಲೂ ಮತ್ತು ಶಕ್ತಿಯಿಂದಲೂ ಆರಾಧಿಸಬೇಕು ಎಂಬುದು ದೇವರ ಚಿತ್ತವಾಗಿದೆ. ದಯವಿಟ್ಟು ಓದಿದ ಮೇಲೆ ನಿಮ್ಮ ಸ್ನೇಹಿತರೊಂದಿಗೆ ಈ ಸಂಗತಿಗಳನ್ನು ನಾಚಿಕೆಯಿಲ್ಲದೇ ಹಂಚಿಕೊಳ್ಳಿರಿ, ನಶಿಸಿ ಹೋಗುವ ಸಂಗತಿಗಳನ್ನೇ ನಾವು ಸಿಹಿ ಕೊಡುವುದರ ಮೂಲಕ ಹಂಚಿಕೊಳ್ಳುತೇವೆ, ಭೂಮ್ಯಾಕಾಶಗಳ ನಿರ್ಮಾಣಿಕನ ಪ್ರೀತಿಯನ್ನು ಹಂಚಿಕೊಳ್ಳುವುದರಲ್ಲಿ ಏಕೆ ನಾಚಿಕೆ, ನಾವು ನಮ್ಮ ತಂದೆ–ತಾಯಿಗಳನ್ನು ಸನ್ಮಾನಿಸುವುದಾದರೆ ಅವರನ್ನು ಸೃಷ್ಟಿಸಿದ ದೇವರನ್ನು ಎಲ್ಲದಕ್ಕಿಂತ ಮೊದಲು ಸನ್ಮಾನಿಸಬೇಕು.

ಹೆಚ್ಚಿನ ವಿವರಗಳಿಗಾಗಿ ಈ ಕೆಳಕಂಡ ವಿಳಾಸಕ್ಕೆ ಬರೆಯಿರಿ.

"ಇರುವಾತನ" ಪ್ರಾರ್ಥನಾಲಯ (ಬ್ರ. ಸುಚಿತ್ ಕುಮಾರ)
ತಾಲೂಕ ಅಭಿವೃದ್ಧಿ ನಿಗಮ (TDB/BDO Office) ಹಿಂಭಾಗ
ಚರ್ಚ್ ಕಂಪೌಂಡ
ರಾಣೇಬೆನ್ನೂರು–581115
+91 8431817304